# ಸೀತಾಸ್ತುತಿ

## ದೇವರನಾಮ

**ಜನಕರಾಜನ ಸುತೆ ಸೀತಾಮಾಯಿ** **ರಾಗ: ಗೌಳ**

ಜನಕರಾಜನ ಸುತೆ ಸೀತಾಮಾಯಿ। ಶ್ರೀ ರಾಮಚಂದ್ರನ ಪಟ್ಟದ ಅರಸಿ॥ಪ॥ ಮಿಥಿಲಾ ನಗರದಿ ಜನಿಸಿದ ತಾಯೆ। ಮಿಥಿಲೆಯ ಸೌಭಾಗ್ಯ ನೀನಾದೆ ತಾಯೆ। ಜನಕನ ವಂಶವ ಉದ್ಧರಿಸಿದೆ ತಾಯೆ। ಜನ್ಮ ಜನ್ಮದ ಪುಣ್ಯ ಜನಕನದಲ್ಲವೆ ತಾಯೆ॥1॥ ಹುಟ್ಟಿದ ಮನೆಯ ಕಣ್ಮಣಿ ನೀನಾದೆ। ಮೆಟ್ಟಿದ ಮನೆಯ ನಂದಾದೀಪವಾದೆ॥ ಗುರುಹಿರಿಯರಿಗೆ ಆದರ ತೋರಿದೆ। ಅಯೋಧ್ಯಾ ಜನರ ವಾತ್ಸಲ್ಯಮಯಿಯಾದೆ॥2॥ ಕಷ್ಟಸುಖವನು ಸಮನಾಗಿ ನೀಕಂಡೆ। ವನವಾಸದಲ್ಲೂ ಅನುಪಮ ಸುಖಕಂಡೆ। ರಘುಕುಲ ತಿಲಕನ ಸರ್ವದಾ ಧ್ಯಾನಿಸಿದೆ। ಚೈತನ್ಯದಾಸನ ಮನವ ಬೆಳಗಿದೆ॥3॥

**ಸೀತೆಯ ಭೂಮಿಜಾತೆಯ** **ರಾಗ: ಪೂರ್ವಿಕಲ್ಯಾಣಿ, ಅಟ್ಟತಾಳ**

ಸೀತೆಯ ಭೂಮಿಜಾತೆಯ। ಲೋಕಮಾತೆಯ ಸ್ತುತಿಸಿ ವಿಖ್ಯಾತೆಯಾ॥ಪ॥ ಕ್ಷೀರವಾರಿಧಿಯ ಕುಮಾರಿಯಾ। ತನ್ನ ಸೇರಿದವರ ಭವಹಾರಿಯಾ। ತೋರುವಳು ಮುಕ್ತಿ ದಾರಿಯಾ। ಸರ್ವಸಾರ ಸುಂದರ ಶ್ರೀನಾರಿಯ॥1॥ ಈಶ ಕೋಟಿಯೊಳು ಗಣನೆಯಾ। ಸ್ವಪ್ರಕಾಶವಾದ ಗುಣಶ್ರೇಣಿಯ। ಈಶಾದ್ಯರ ಪೆತ್ತ ತರುಣಿಯ। ನಿರ್ದೋಷ ವಾರಿಧಿ ಕಲ್ಯಾಣಿಯ॥2॥ ವಿಜಯವಿಠ್ಠಲನ್ನ ರಾಣಿಯ। ಪಂಕಜ ಮಾಲೆ ಪಿಡಿದ ಪಾಣಿಯ। ವಿಜಯಲಕ್ಷ್ಮಿ ಗಜಗಮನೆಯ ನಿತ್ಯ। ಸುಜನವಂದಿತೆ ಅಹಿವೇಣಿಯಾ॥3॥

## ಭಕ್ತಿಗೀತೆ

**ಅವನಿಜೆ ಜಾನಕಿ ವನಜನಾಭನ ರಾಣಿ** **ರಾಗ: ಹಿಂದೋಳ, ಆದಿ**

ಅವನಿಜೆ ಜಾನಕಿ ವನಜನಾಭನ ರಾಣಿ। ನವಕಾಂತಿಯುತ ರಮಣೀಯರಮಣಿ॥ಪ॥ ಲವಕುಶಜನನಿ ಆಶ್ರಮವಾಸಿನಿ। ಪವನಜ ಹನುಮಾರಾಧಿತ ಪೂಜಿನಿ॥ಅ.ಪ॥ ಸುತೆಯಾಗಿ ಮಿಥಿಲಾಧಿಪನ ಸಂತಸಗೊಳಿಸಿ। ಅತಿಶೌರ್ಯದಿ ಹರಿಚಾಪಗೆಲ್ದನ ವರಿಸಿ। ಸತಿಯಾಗಿ ದಾಶರಥಿ ಮನವನೊಲಿಸಿ। ಪತಿತಪಾವನೆ ಸೀತೆ ನೀ ಮೆರೆದೆ॥1॥ ವನದಲಿ ರಾಮನ ಸಹಚರಣಿಯಾಗಿ। ವನದಿ ಸೇತುಬಂಧನಕೆ ಕಾರಣಳಾಗಿ। ದನುಜ ದಶಕಂಠಗೆ ಕಾಲರೂಪಿಣಿಯಾಗಿ। ಮನುಜರೂಪಿಂದೆ ದೇವೀ ವಿಖ್ಯಾತಳಾದೆ॥2॥

## ಕೀರ್ತನೆ

**ಮಾ ಜಾನಕೀ ಚೇ ಬಟ್ಟಗ** **ರಾಗ: ಕಾಂಬೋಜಿ, ಆದಿತಾಳ**

ಮಾ ಜಾನಕೀ ಚೇ ಬಟ್ಟಗ ಮಹಾರಾಜು ವೈತಿವಿ॥ಪ॥ ರಾಜ ರಾಜವರ ರಾಜೀವಾಕ್ಷ ವಿನು ರಾವಣಾರಿ ಯನಿ ರಾಜಿಲ್ಲು ಕೀರ್ತಿಯು॥ಅ.ಪ॥ ಕಾನಕೇಗಿ ಯಾಜ್ಞ ಮೀರಕ ಮಾಯಾಕಾರ ಮುನಿಚಿ ಶಿಖಿ ಜೆಂತನೇ ಯುಂಡಿ ದಾನವುನಿ ವೆಂಟನೇ ಚನಿಯಶೋಕತರು ಮೂಲನುಂಡಿ ವಾನಿ ಮಾಟಲಕು ಗೋಪಗಿಂಚಿ ಕಂಟವಧಿಯಿಂಚಕ ಯೇಯುಂಡಿ ಶ್ರೀ ನಾಯಕ ಯಶಮು ನೀಕೇ ಗಲ್ಗಜೇಯಲೇದ ತ್ಯಾಗರಾಜ ಪರಿಪಾಲ॥ಚರಣ॥ ಚಿಟ್ಟೆಸ್ವರ ॥ ... ಸಮಗಮ ಪದಪಮ ಗಪಮಪ ಗ । ಮರಿಗ ಸಗರಿಗ ಸ । ನಿಧಪ ಧಸರಿಗಮ ॥ ಪದಪ ನಿಧಪಧ ಮಗಪದ ರಿಸಗರಿ ಮ । ಗರಿಗ ಸರಿಸನಿ ಧ । ರಿಸನಿ ಧಪಮಗರಿ ॥ ಸರಿಗ

**ವನಜ ನಯನುಡನಿವಲಚಿತಿ** **ರಾಗ: ಕೇತಾರ ಗೌಳ, ಆದಿತಾಳ**

ವನಜ ನಯನುಡನಿವಲಚಿತಿ ವೇವಾನೀ ಮನಸುನ ದಯಲೇದೇ ಸೀತಮ್ಮ ವಾನಿ।।ಪ।। ಮುನುಪಟಿಚರಿತ ಮುಲನು ವಿನಿಯುಂಡಿಯು ವನಿತ ಸ್ವಭಾವಮು ವಲನ ಶ್ರೀರಾಮುನಿ ।।ಅ.ಪ।। ಬರುಲ ಬಾಧಲುಗಾನಿ ನೋರ್ವಕ ಯುಂಡಿಯು ಪರಮ ಧರ್ಮಮನಿ ಬಾಗುಗ ಪಲುಕುನು ವರದುಡು ಆಶ್ರಿತ ವತ್ಸಲುಡನಿ ಪೇರೆ ಧರಣಿಜ ಯೆರುಗು ಮಾ ತ್ಯಾಗರಾಜ ವಿನುತುನಿ।।ಚರಣ।।

**ಸೀತಮ್ಮ ಮಾಯಮ್ಮ ಶ್ರೀರಾಮುಡು** **ರಾಗ: ವಸಂತ, ರೂಪಕತಾಳ**

ಸೀತಮ್ಮ ಮಾಯಮ್ಮ ಶ್ರೀರಾಮುಡು ಮಾತಂಡ್ರಿ।।ಪ।। ವಾತಾತ್ಮಜ ಸೌಮಿತ್ರಿ ವೈನತೇಯ ರಿಪು ಮರ್ದನ ಧಾತ ಭರತಾದುಲು ಸೋದರುಲು ಮಾಕು ಓ ಮನಸ।।ಅ.ಪ।। ಪರಮೇಶ ವಶಿಷ್ಠ ಪರಾಶರ ನಾರದ ಶೌನಕ ಶುಕ ಸುರಪತಿ ಗೌತಮ ಲಂಬೋದರ ಗುಹ ಸನಕಾದುಲು ಧರ ನಿಜ ಭಾಗವತಾಗ್ರೇಸರು ಲೆವರೋ ವಾರೆಲ್ಲನು। ವರ ತ್ಯಾಗರಾಜುನಿಕಿ ಪರಮ ಬಾಂಧವುಲು ಮನಸ।।ಚರಣ।।

## ಸಂಪ್ರದಾಯ

**ನಗುತ2 ಬಾರೆ ಬೇಗ ಝುಗಝುಗಿಸುವ** **ರಾಗ: ದರ್ಬಾರ್, ರೂಪಕತಾಳ**

ನಗುತ ನಗುತ ಬಾರೆ ಬೇಗ। ಝುಗಝುಗಿಸುವ ಹಸೆಗೆ ಈಗ।।ಪ।। ರಘುರಾಮರ ಪ್ರಾಣರಮಣಿ ಅಗಣಿತ ಸೌಭಾಗ್ಯದಾಯಿನಿ।।ಅ.ಪ।। ಹರುಷದಿಂದ ಜನಕಭೂಪ ವಿರಚಿಸಿ ಘನಯಾಗವನ್ನು। ಧರಣಿಯ ಶೋಧನೆಯ ಮಾಡೆ ದೊರಕಿದಾ ಭೂಯಿಷ್ಠ ಜಾತೆಯೆ।।1।। ಭರದಿ ರಾಮಚಂದ್ರ ಬಂದು ಹರನ ಧನುವ ಜಯಿಸಲಂದು। ಕೊರಳೊಳು ಹಾರವನೆ ಹಾಕಿ ಕರವ ಪಿಡಿದ ಧರಣಿಜಾತೆಯೆ।।2।। ಮಣಿದು ಬೇಡಲಾಗ ಚೂಡಾಮಣಿಯ ಮಾರುತ ತನಯ ಧೀರಾ। ವನದಿ ಖಳನ ಗೆಲಿದು ಬಂದಾ ಗುಣನಿಧಿ ಶ್ರೀ ಜಾನಕಿದೇವಿಯೆ।।3।।

**ನೀ ಹಸೆಗೇಳು ಜನಕ ತನಯೇ** **ರಾಗ: ಮೋಹನ**

ನೀ ಹಸೆಗೇಳು ಜನಕ ತನಯೇ। ರಾಮನರಗಿಣಿ।।ಪ।। ಜನಕನ ಮನೆಯಲಿ ಜನಿಸಿದ ಬಾಲೆ। ಇನಕುಲ ತಿಲಕನ ಒಲಿದ ಸುಶೀಲೆ। ಧನುವನು ಮುರಿದ ಶ್ರೀರಾಮನ ಕೂಡೆ ಘನತರ ಪೀಠಕೆ। ನೀದಯೆ ಮಾಡೆ।।1।। ದಶರಥರಾಯನ ಸೊಸೆಯೆಂದೆನಿಸಿ ದಶಶಿರಗಳ ತರಿದವನನು ವರಿಸಿ। ಹಸನಾಗಿರುತಿಹ ಕುಸುಮದರಸಿ ನಸು ನಗುತಲಿ ಸಂತಸವನು ತೋರುತಲಿ।।2।। ಧರೆಯೊಳು ದಕ್ಷಿಣ ಕಾಶಿಯ ಬೇಗ। ಪೊರೆಯುವರೇ ಅರಸನಿಗೀಗ। ಸರಸದಿ ಸುಂದರಿ ಕರೆಯುವಳೀಗ। ಪುರ ನಾರಿಯರು ಸಂತೋಷಿಸುವಾಗ।।3।।

**ದಿವ್ಯಗುಣಮಣಿ ಹಸೆಗೀಗ ಬಾರೆ**

ದಿವ್ಯಗುಣಮಣಿ ಹಸೆಗೀಗ ಬಾರೆ ದೇವಿ ಶಶಿ ಮುಖೀ।।ಪ।। ಸುಂದರ ಶ್ರೀರಘುರಾಮರ ಮಡದೀ ಪ್ರೇಮ ಸುಧಾಮನ ಮಡದಿ ಸುಂದರಿಮಣಿಯೇ ವಂದಿಸಿ ಕರೆವೆವು ಚಂದದಿ ನೀ ಬೇಗ ಬಾರೆ।।1।। ಬಾಲೆ ಸುಶೀಲೆ ಲೋಲೆ ವನಮಾಲೇ ಬಾಲ ಶ್ರೀಕೃಷ್ಣನ ಸಹಿತಾ, ನಾರಿಯರೆಲ್ಲಾ ನೆರೆದಿಹ ಸಭೆಯೊಳು ನಲಿಯುತ ನೀ ಬೇಗ ಬಾರೆ।।2।। ಚಂದಿರ ಬಿಂಬವ ಪೋಲುವ ಮುಖದೊಳು ನಲಿಯುತ ನೀ ಬೇಗ ಬಾರೆ ಸುಂದರವಾದ ಪಾದಪದ್ಮವ ತೋರುತ ಚಂದದಿ ನೀ ಬೇಗ ಬಾರೆ।।3।।

**ಬಾ ಬಿಸಜಾಕ್ಷಿಯೆ ಜನಕನ** **ರಾಗ: ಕಮಾಚ್, ಆದಿತಾಳ**

ಬಾ ಬಿಸಜಾಕ್ಷಿಯೆ ಜನಕನ ಕುಮಾರಿ। ಹಸೆಗೆ ಬಾರೆ ಸುಂದರಿ।।ಪ।। ಸುತ್ತ ಜ್ಯೋತಿಗಳ್ ಬೆಳಗಲು ಸುರರು ವೇದವ ಪಾಡಲು। ಮತ್ತೆ ಮೆಲ್ಲಡಿ ಇಡುತಲಿ।।1।। ಭೂಮಿಜೆ ಜಗನ್ಮಾತೆ ಕಾಮಿತಫಲದಾತೆ। ರಾಮ ವಿಠಲನರಸಿಯೆ।।2।।

**ಬಾರಮ್ಮ ಧರಣಿಸುತೆ ಹಸೆಗೆ** **ರಾಗ: ಮೋಹನ, ಆದಿತಾಳ**

ಬಾರಮ್ಮ ಧರಣಿಸುತೆ ಹಸೆಗೆ ।।ಪ।। ನಾರೀಮಣಿಯರಿಂದು ಮೀರಿದ ಹರುಷದಿಂ। ಸಾರಿ ಕರೆವ ರಘುವರ ನೀರೆ ಮುದದಿ ನೀ।।ಅ.ಪ.।। ಕಾಂಚನ ಭೂಷಣ। ಸಂಚಯವನು ತೊಟ್ಟು। ಕಾಂಚಿಯ ಕಿಂಕಿಣಿ ಇಂಚರದೊಳು ನೀ।।1।। ಕರುಣಾಪಾಂಗದಿ। ಕರೆಯುತೆ ಮಿಂಚನು। ಕರಿವರ ಗಮನೆಯೆ। ಭರದೊಳು ನೀ।।2।। ಶ್ರೀರಮಣೀ ಮಣಿ। ಸ್ಮೇರ ಮುಖದಿ ನಗೆ। ಬೀರುತೆ ಬಿಂಕದೊಳಾರಯೆ ಸಖಿಯೆ।।3।। ಪರಮ ಶುಭೋದಯೆ। ವರನರಹರಿಪ್ರಿಯೆ। ಶರಧಿತನಯೆ ಇಂದಿರೆ ಸದಯೆ।।4।।

**ಬಾರೆಲೆ ಭೂಮಿಜಾತೆ ಸೀತೆ** **ರಾಗ: ಕಾನಡ**

ಬಾರೆಲೆ ಭೂಮಿಜಾತೆ ಸೀತೆ। ಬಾರೆಲೆ ಲೋಕಮಾತೆ।।ಪ।। ಜನಕನ ಮನೆಯಲಿ ಜನಿಸಿದ ದೇವಿ ರಾಮರ ಕೈ ಪಿಡಿದು ಮಣಿಮಯ ಪೀಠಕೆ ದಯಮಾಡು।।1।। ರಾವಣ ಕುಂಭಕರ್ಣರ ಕೊಂದ ರಾಕ್ಷಸರನೆ ಗೆಲಿದಾ ಲೋಕಮಾತೆ ಪ್ರಖ್ಯಾತೆಯೇ ನೀ ಬಾರೆ।।2।। ಝಗಝಗಿಸುವ ನವರತ್ನದ ಪೀಠಕೆ ಸುಗುಣಿಯೇ ನಿನ್ನ ಪ್ರಾರ್ಥಿಪರು ಶೃಂಗಾರಿ ಜಗದೊಡೆಯನರಾಣಿ ಬಾರೆ।।2।।

**ಬಾರೇ ಪೀಠಕೆ ನಾರಿ ಜಾನಕಿ**

ಬಾರೇ ಪೀಠಕೆ ನಾರಿ ಜಾನಕಿ ನೀರಜ ಗಂಧಿನಿ।।ಪ।। ಗೆಜ್ಜೆ ಕಡಗ ಪಿಲ್ಲಿ ಮಿಂಟಿಕೆ ವಜ್ರದುಂಗುರ ಹೊಳೆಯುತ ಹೆಜ್ಜೆಯ ಮೇಲೆ। ಹೆಜ್ಜೆಯನಿಕ್ಕುತ ಮುದ್ದು ಮುಖವ ತೋರುತ ಸಾರುತಾ।।1।। ಕೀರವಾಣಿ ಚಾರುವೇಣಿ ಸಾರಪಂಕಜ ಪಾಣಿಯೇ ಧೀರ ರಾಘವನರಸಿ ನಿನ್ನನು ಸಾರಿ ಕರೆವೇ ವಾರಿಜ ಗಂಧಿನಿ।।2।। ನೀತಿವಂತೆ ವಿಖ್ಯಾತೆ ರಾಮನ ಪ್ರೀತೆ ಮೂರ್ಜಗನ್ಮಾತೆಯೇ। ಜಾತಿಮುತ್ತಿನ ಹಾರವಿಟ್ಟು ಸೀತೆ ಶ್ರೀರಘುನಾಥನ ಪ್ರೀತೆಯೇ।।3।।

**ಸೀತೆ ಬಾರೆ ಹಸೆಗೀಗ** **ರಾಗ: ಭೈರವಿ**

ಸೀತೆ ಬಾರೆ ಹಸೆಗೀಗ। ಮಾತೆ ನಿನ್ನ ಸ್ಮರಿಸುವೆ।।ಪ।। ಜನಕನ ಉದರದೆ। ಜನಿಸಿದೆ ಅಂಬುಜಾಕ್ಷಿ। ರಾಮನ ಕೈಯ್ಯ ಪಿಡಿದು। ರಾವಣನ ಕೊಲ್ಲಿಸಿದೆ।।1।। ಯಾಗಮಾಡಬೇಕೆಂದು। ರಾಮರು ಚಿಂತಿಸಲು। ವಾಲ್ಮೀಕಿ ಮುನಿಗಳಿಂದ। ಧನ್ಯಳಾದ ಮಾನಿನಿ।।2।।

**ಹಸೆಗೇಳು ಜನಕ ತನಯೇ** **ರಾಗ: ಮೋಹನ**

ಹಸೆಗೇಳು ಜನಕ ತನಯೇ। ರಾಮನರಗಿಣಿ।।ಪ।। ಜನಕನ ಮನೆಯಲಿ ಜನಿಸಿದ ಬಾಲೆ। ಇನಕುಲ ತಿಲಕನ। ಒಲಿದ ಸುಶೀಲೇ। ಧನುವನು ಮುರಿದ ಶ್ರೀರಾಮನ ಕೂಡೆ ಘನತರ ಪೀಠಕೆ। ನೀ ದಯಮಾಡೆ।।1।। ದಶರಥರಾಯನ ಸೂಸೆಯೆಂದೆನಿಸಿ ದಶಶಿರಗಳ ತರಿದವನನು ವರಿಸಿ। ಹಂಸನಾಗಿರುತಿಹ ಕುಸುಮದರಸಿ ನಸುನಗುತಲಿ ಸಂತಸವನು ತೋರುತಲಿ।।2।। ಧರೆಯೊಳು ದಕ್ಷಿಣ ಕಾಶಿಯ ಬೇಗ। ಪೊರೆಯುವರೇ ಅರಸನಿಗೀಗ। ಸರಸದಿ ಸುಂದರಿ ಕರೆಯುವಳೀಗ। ಪುರ ನಾರಿಯರು ಸಂತೋಷಿಸುವಾಗ ।।3।।

## ಲಾಲಿ

**ಅಷ್ಟ ಕಂಬದ ಮಂಟಪವಲಂಕರಿಸೀ** **ರಾಗ: ಕುರಂಜಿ**

ಅಷ್ಟ ಕಂಬದ ಮಂಟಪವಲಂಕರಿಸೀ। ಪಾಟ್ಟವಾಣಿಯ ಮೇಲ್ಕಟ್ಟ ಶೃಂಗರಿಸೀ। ಅಷ್ಟದಿಕ್ಕಿಗೆ ಹೊನ್ನ ಗಂಟೆಗಳ ರಚಿಸೀ। ಬಟ್ಟ ಮುತ್ತಿನ ಜಲ್ಲೆಗಳಲಂಕರಿಸೀ।।ಲಾಲಿ।। ಕನಕ ನಿರ್ಮಿತವಾದ ತೊಟ್ಟಿಲ ತರಿಸೀ। ಮುನಿ ಮುಖ್ಯಾದಿಗಳೆಲ್ಲರ ಬೇಗ ಕರೆಸೀ। ಅನುಕೂಲವನೆ ಮಾಡಿ ಗಣಪನ ಭಜಿಸೀ। ಜನಕಜೆ ಕುವರರ ತೊಟ್ಟಿಲೊಳಿರಿಸೀ।।ಲಾಲಿ।। ಚಿನ್ನದ ತೊಟ್ಲಿಗೆ

ರನ್ನದ ಕಾವು। ಬಿನ್ನಾಣ ಪೋಲುವ ಮುತ್ತಿನ ಹಲಗೆ। ಪನ್ನಂಗಶಯನನ ಮನದೊಳು ಸ್ಮರಿಸೀ। ಪನ್ನಂಗ ಜೋ ಜೋ ಎಂದಳು ಸೀತೆ॥ಲಾಲಿ॥ ಅರಶಿನೆಣ್ಣೆಗಳಿಂದ ಮಿಂದಳೆ ಸೀತೆ। ಅರಸಿ ಮಲ್ಲಿಗೆಯಾ ಮುಡಿದಳೆ ಸೀತೆ। ಅರಸು ಲವಕುಶರಾ ತೊಟ್ಟಿಲೊಳಿಟ್ಟು ಹರಸಿ ಪಾಡುತಾ ಇದ್ದಳಾ ಸೀತೆ॥ಲಾಲಿ॥ ದಿವಿಜ ಸತಿಯರೆಲ್ಲರು ಬಂದು ನವರತ್ನ ಸೇಸೆಗಳೆಲ್ಲಾ ಕಳೆದು ಕವಿದಾ ಮುಖದಾ ಮುಖದಾ ಮುಂಗುರುಳನ್ನೆ ಸರಿಸುತ್ತಾ ಧವಳ ಶೋಭನೆಯಾ ಪಾಡಿ॥ಲಾಲಿ॥

❖ ❖ ❖

# ಹನುಮ ಸ್ತುತಿ

## ದೇವರನಾಮ

### ಅಹುದಹುದೋ ಹನುಮಂತ — ರಾಗ: ಹಿಂದೋಳ

ಅಹುದಹುದೋ ಹನುಮಂತ ಅಹುದು ನೀ ಬಲವಂತ॥ಪ॥ ಅಹುದೋ ಮುಖ್ಯಪ್ರಾಣ ಮೂಲಗುರುವಹುದೋ ॥ಅ.ಪ॥ ಅಂಜನೆಯ ಗರ್ಭದಲಿ ಅಂದು ಜನಿಸಿದೆ ನೀನು। ಸಂಜೀವನವ ತಂದೆ ಸಕಲ ಕಪಿಗಳಿಗೆ। ಅಂಜದಲೆ ನೀ ಪೋಗಿ ಶರಧಿಯನು ನೆರೆದಾಟಿ। ಕಂಜಾಯತಾಕ್ಷಿ ಗುಂಗುರವಿತ್ತೇ ಹನುಮ॥1॥ ಕುಂತಿಯ ಜಠರದಲಿ ಉದ್ಭವಿಸಿದೆಯೋ ನೀನು। ಪಂಥಗಳ ನಾಡಿ ದಾಯಾದ್ಯರೊಡನೆ। ಕಂತುಪಿತನನು ಸೇರಿ ಕೌರವರ ಬಲಸವರಿ। ಸಂತೋಷದಿಂದ ಸಾಮ್ರಾಜ್ಯ ಕೈಗೊಂಡೆ ಭೀಮ॥2॥ ಮಧ್ವಾವತಾರದಲಿ ಮುನಿವೇಶವನು ತಾಳಿ। ಅದ್ವೈತವೆಂಬ ಅರಣ್ಯವನು ಗೆಲಿದೆ। ಮದ್ವ ಶಾಸ್ತ್ರವ ಮಾಡಿ ಮತವನುದ್ಧರಿಸಿದೆ। ಮುದ್ದು ಹಯವದನ ನನ್ನ ದಾಸ ನಿರ್ದೋಷ॥3॥

### ಆಕಾಶ ಭೂಮಿಗಳ ಒಂದುಮಾಡಿ ನಿಂತ

ಆಕಾಶ ಭೂಮಿಗಳ ಒಂದುಮಾಡಿ ನಿಂತ ನಿನ್ನ ಈ ಆಕಾರವೇನು॥ಪ॥ ಕಣ್ಣುಗಳ ಕೋರೈಸುವ ಕಾಂತಿ ಚೆಲ್ಲುವ ಈ ಭವ್ಯರೂಪವೇನು॥ ನೋಡುವ ಬಗೆ ಹೇಗೆ ನಿನ್ನ ಬೇಡುವ ಬಗೆ ಹೇಗೆ ನಿನ್ನ ಪಾದ ಹುಡುಕಲಾರೆ ಹನುಮ ಮೊಗವ ಕಾಣಲಾರೆ। ಕೋಟಿ ಕಣ್ಣು ಸಾಲದಯ್ಯ ನಿನ್ನ ನೋಡಲು। ನಿಂತ ರೀತಿಯು ತನುವ ಕಾಂತಿಯು ಉರಿವ ಸೂರ್ಯಹಣತೆ ದೀಪ ದಂತೆ ಕಾಣುತಿರಲು ಹೇಗೆ॥1॥ ನಿನ್ನ ಉಸಿರ ಬಿಸಿಗೆ ಹೆದರಿ ನದಿಗಳಾವಿಯಾಗುತಿರಲು ದಿವ್ಯರೂಪ ಕಂಡು ಗಿರಿಗಳೆಲ್ಲ ನಡುಗುತಿರಲು। ನಿನ್ನ ಭಾರ ತಾಳಲೆಂದು ಭೂಮಿ ಕುಸಿದು ಹೋಗುತಿರಲು ಹೇಗೆ ನಾನು ನಿಲ್ಲಲಯ್ಯ ನಿನ್ನ ನೋಡಲು ರೋಮ ರೋಮವು ರಾಮನಾಮವು ಶಂಖನಾದ ತಾಳವಾದ್ಯ ದಶದಿಕ್ಕಲಿ ಮೊಳಗುತಿರಲು॥2॥

### ಈತ ಮುಖ್ಯಪ್ರಾಣನಾಥ — ರಾಗ: ಬೇಹಾಗ್, ಅಟ್ಟತಾಳ

ಈತ ಮುಖ್ಯಪ್ರಾಣನಾಥ॥ಪ॥ ಈತ ಶ್ರೀರಾಮ ಸೇವಕನೆನಿಸಿದಾತ॥ ಅ. ಪ ॥ ಭಾನುವಿನ ತುಡುಕಿದಾತ ಭಾರತಕೆ ಬಂದಾತ। ವಾನರೋತ್ತಮ ಹನುಮ ಹರಿ ಶರಣನೀತ॥1॥ ವಾರಿಧಿಯ ನೆಗೆದಾತ ವನಚರಾಗ್ರೇಸರನೀತ। ವಾರಿಜಾಕ್ಷಿಗೆ ಮುದ್ರಿಕೆ ವಹಿಸಿ ಇತ್ತಾತ॥2॥ ಲಂಕಿಣಿಯ ಗೆಲಿದಾತ ಲಂಕೆಯನು ಉರಿಸಿದಾತ। ಪಂಕಜೋದ್ಭವನ ಪಟ್ಟಭದ್ರನೀತ॥3॥ ವಾನರೋತ್ತಮ ನೀತ ವಸುಧೆಗೆ ವೆಗ್ಗಳನೀತ। ದಾನವಾಂತಕ ಹನುಮ ದಶ ಪ್ರಮತಿಯೀತ॥4॥ ಸ್ಮರನಂಬು ಗೆಲಿದಾತ ಶರಣ ಜನರಿಗೆ ದಾತ। ಸಿರಿಪುರಂದರ ವಿಠಲಗೆ ಅಚ್ಛಿನ್ನ ಭಕ್ತನೀತ॥5॥

### ಎಣೆಯಾರೋ ನಿನಗೆ ಹನುಮಂತರಾಯ — ರಾಗ:ಸಿಂಹೇಂದ್ರಮಧ್ಯಮ

ಎಣೆಯಾರೋ ನಿನಗೆ ಹನುಮಂತರಾಯ। ಪ್ರಣತ ಜನ ಮಂದಾರ ಪವನ ಸುಕುಮಾರ ॥ಪ॥ ಅಡಿಗಡಿಗೆ ರಾಮ ಪದಾಂಬುಜಕೆ ವಂದಿಸುತ। ನಡೆದೊಡನೆ ಮುದ್ರಿಕೆಯ ಪಡೆದು ಮುದದಿ। ದಡದಡನೆ ಅಂಬುದಿಯ ದಾಟಿ ಸೀತೆಯ